ಡಾ॥ ಬಿ. ವ್ಹಿ. ಶಿರೂರ

# ಶ್ರವಣಬೆಳ್ಗೊಳದ ತ್ಯಾಗದ ಬ್ರಹ್ಮದೇವರ ಕಂಬ

ಈಗ ದೊರೆತಿರುವ ಶ್ರವಣಬೆಳ್ಗೊಳದ ೫೭೩ ಶಾಸನಗಳಲ್ಲಿ ದೊಡ್ಡ ಬೆಟ್ಟದ ಮೇಲಿರುವ 'ತ್ಯಾಗದ ಬ್ರಹ್ಮದೇವರ ಕಂಬ'ವೂ ಒಂದು. ಸಿಂಹಪೀಠದ ಮೇಲೆ ನಿಲ್ಲಿಸಿದ ಸಿಲಿಂಡರಾಕಾರದ ಈ ಕಂಬದ ಕೆಳಗಿನ ಕಾಲು ಭಾಗ ಚಚ್ಚೌಕಾಗಿದೆ. ಮೇಲಿನ ಮಿಕ್ಕ ಭಾಗವೆಲ್ಲ ಸುಂದರ ಹೂ ಬಳ್ಳಿಯ ಚಿತ್ರವನ್ನೊಳಗೊಂಡಿದೆ. ಚೌಕೋನಾಕಾರದ ಮಧ್ಯದ ನಾಲ್ಕೂ ಭಾಗಗಳಲ್ಲಿ ಚಾವುಂಡರಾಯ ತನ್ನ ವಂಶಾವಳಿಯನ್ನೂ ಕಾರ್ಯ ಸಾಧನೆಯನ್ನೂ ಹೇಳುವ ಶಾಸನವೊಂದನ್ನು ಕೆತ್ತಿಸಿದ್ದಾನೆ. ಆದರೆ ದುರ್ದೈವಕ್ಕೆ ಕ್ರಿ. ಶ. ಸು. ೧೨೦೦ರಲ್ಲಿ ಹೆಗ್ಗಡೆ ಕಣ್ಣ ಎಂಬುವನು ತನ್ನ ಒಂದು ಶಾಸನ ಬರೆಸುವುದಕ್ಕಾಗಿ ಈ ಶಾಸನದ ಮೂರು ಬದಿಗಳನ್ನು ಅಳಿಸಿ ಹಾಕಿದ್ದಾನೆ. ಉಳಿದಿರುವ ಶಾಸನಭಾಗದಲ್ಲಿ ಚಾವುಂಡರಾಯನು ತನ್ನ ಅರಸು ಜಗದೇಕವೀರ(ರಾಚಮಲ್ಲ)ನ ಅಪ್ಪಣೆಯ ಮೇರೆಗೆ ಪಾತಾಳಮಲ್ಲನ ತಮ್ಮನಾದ ವಜ್ಜಳದೇವನ ಮೇಲೆ ಸೈನ್ಯ ತೆಗೆದುಕೊಂಡು ಹೋಗಿ ವೈರಿ ಸೈನ್ಯ ನಾಶಗೊಳಿಸಿದ. ನೊಳಂಬ ರಾಜ ಮತ್ತು ರಣಸಿಂಗರೊಂದಿಗೆ ನಡೆದ ಯುದ್ಧದಲ್ಲಿ ಜಗದೇಕವೀರನು ಚಾವುಂಡರಾಯನ ಶೌರ್ಯವನ್ನು ಸುತ್ತಿಸಿದ ಇತ್ಯಾದಿ ವಿವರ ಮಾತ್ರ ಇದೆ.

ಶಾಸನದಿಂದ ಹಾಳಾಗಿ ಹೋಗಿರುವ ಪಾಠ (Text)ದಲ್ಲಿ ಏನು ವಿಷಯ ಇದ್ದಿರಬಹುದು? ಚಾವುಂಡರಾಯ ಇದನ್ನು ಯಾವ ಉದ್ದೇಶಕ್ಕಾಗಿ ನಿಲ್ಲಿಸಿರಬಹುದು ?—ಎಂಬುದು ಕುತೂಹಲ ಹುಟ್ಟಿಸುವ ವಿಷಯವಾಗಿದೆ. ಇದನ್ನು ಪತ್ತೆ ಹಚ್ಚಲು ಸದ್ಯ ನಮಗೆ ಯಾವ ಆಧಾರವೂ ಇಲ್ಲ. ಜನ ಮಾತ್ರ ಇದನ್ನು ಇಂದಿಗೂ 'ತ್ಯಾಗದ ಬ್ರಹ್ಮದೇವರ ಕಂಬ' ಎಂದು ಕರೆಯುತ್ತಾರೆ. ಬಹುಶಃ ಇದು ತುಂಬ ಪ್ರಾಚೀನ ಕಾಲದಿಂದಲೂ ಜನರ ಬಾಯಲ್ಲಿ ಬದುಕಿ ಬಂದ ಶಬ್ದವಾಗಿರಬೇಕು. ಗ್ರಾಮೀಣರು ಇದಕ್ಕೆ ಕಾಲ್ಪನಿಕ ವಿವರಣೆ ಕೊಡಲು ಪ್ರಯತ್ನಿಸಿ, ಚಾವುಂಡರಾಯನು ಇಲ್ಲಿ ಕುಳಿತು ದಾನ ಮಾಡುತ್ತಿದ್ದ, ಆದಕ್ಕಾಗಿ ಈ ಕಂಬಕ್ಕೆ ಈ ಹೆಸರು ಬಂದಿತು, ಇತ್ಯಾದಿಯಾಗಿ ಹೇಳತೊಡಗಿದರೆಂದು ತೋರುತ್ತದೆ. ಒಬ್ಬ ವ್ಯಕ್ತಿ ದಿನವೂ ಒಂದು ಕಟ್ಟೆಯ ಮೇಲೆ ಬಂದು ಕುಳಿತೇ ದಾನ ಮಾಡುತ್ತಿದ್ದ, ಅಥವಾ ದಾನ ಮಾಡಬೇಕಾದ ಪ್ರಸಂಗ ಒದಗಿದಾಗ ಈ ಕಟ್ಟೆಗೇ ಬರುತ್ತಿದ್ದ ಎಂದರೆ ವಿಚಿತ್ರವೆನಿಸುತ್ತದೆ. 'ತ್ಯಾಗದ ಕಂಬ' ಎಂಬ ಪ್ರಚಲಿತ ಶಬ್ದವನ್ನು ಗಮನಿಸಿ ಜನಸಾಮಾನ್ಯರು ಕಟ್ಟಿದ ಕಥೆಯಿದು ಎಂಬುದು ಸ್ಪಷ್ಟವಾಗುತ್ತದೆ. ಹಾಗಾದರೆ ಅಳಿಸಿಹೋದ ಅಕ್ಷರಗಳಲ್ಲಿ ಏನು ವಿಷಯವಿದ್ದಿರಬಹುದು ಎಂಬುದು ಕುತೂಹಲದ ವಿಷಯವಾಗಿ ಉಳಿದು, ತ್ಯಾಗದ ಕಂಬ ಎಂಬ ನುಡಿಗಟ್ಟು ಈ ಕುತೂಹಲಕ್ಕೆ ಏನಾದರೂ ಸೂಚನೆ ನೀಡಬಹುದೇ ? ಎನಿಸುತ್ತದೆ.

ಈ ಸಂದರ್ಭದಲ್ಲಿ ಡಾ॥ ಎಂ. ಎಂ. ಕಲಬುರ್ಗಿ ಅವರ ಒಂದು ವ್ಯಾಖ್ಯಾನ ನಮ್ಮ ಗಮನ ಸೆಳೆಯುತ್ತದೆ. ಅವರು ಪಂಪಭಾರತದ 'ಚಾಗದ ಕಂಬಮಂ ನೀಡಿ, ಬೀರದ ಶಾಸನಮಂ ನೆಗಟ್ಚಿ' ಎಂಬ ವಾಕ್ಯಕ್ಕೆ ವಿವರಣೆ ನೀಡುತ್ತ 'ಮೂಲತಃ ತ್ಯಾಗದ ಕುರುಹಾಗಿ ಕಂಬವನ್ನು ಶೌರ್ಯದ ಕುರುಹಾಗಿ ಶಿಲಾಫಲಕರೂಪದ ಶಾಸನವನ್ನು

ನಿಲ್ಲಿಸುತ್ತಿರಬಹುದು' ಎಂದು ಹೇಳುತ್ತಾರೆ. ತ್ಯಾಗ (ದಾನ)ದ ಕುರುಹಾದ 'ಗೋಸಾಸ' ಸ್ಮಾರಕಗಳನ್ನು ಕುರಿತು ಶಾಸನಗಳಲ್ಲಿ 'ಕಂಬಮಂ ನಿಲಿಸಿದಂ, ಮೋಂಟೆಯುಂ ನಿಲಿಸಿದಂ' ಎಂದು ಹೇಳಲಾಗಿದೆ ಎಂಬು ದನ್ನೂ ಅವರು ಆಧಾರವಾಗಿ ಹಿಡಿಯುತ್ತಾರೆ. ಈ ವಿವರಣೆಯ ಬೆಳಕಿನಲ್ಲಿ ಶ್ರವಣಬೆಳ್ಗೊಳದ ತ್ಯಾಗದ ಕಂಬ ಶಬ್ದವನ್ನು ನೆನೆದರೆ ಈ ಶಾಸನದ ಅಳಿಸಿಹೋದ ಸ್ಥಾನದ 'ತ್ಯಾಗ(ದಾನ)'ದ ವಿಷಯುವನ್ನು ಬರೆಯುಲಾಗಿ ದ್ದಿತೆಂದೂ ಆ ಕಾರಣಕ್ಕಾಗಿ ಅದನ್ನು 'ತ್ಯಾಗದ ಕಂಬ' ಎಂದು ಕರೆಯುಲಾಗಿದ್ದು, ಆಮೇಲೆ ಜನಪದರು ಚಾವುಂಡರಾಯ ಇಲ್ಲಿ ಕುಳಿತು ದಾನ ಮಾಡುತ್ತಿದ್ದ ಎಂಬ ಕಾಲ್ಪನಿಕ ವಿಷಯುವನ್ನು ಪ್ರಚಾರ ಮಾಡಿದರೆಂದೂ ಹೇಳಬಹುದಾಗಿದೆ. ತ್ಯಾಗಕ್ಕೆ ಕಂಬವನ್ನು ನಿಲ್ಲಿಸುತ್ತಿದ್ದ ರೆಂಬ ಪಂಪನ ಮಾತಿಗೆ ಉದಾಹರಣೆಯೆನ್ನುವಂತೆ ಈ ಶಾಸನದ 'ತ್ಯಾಗದ ಕಂಬ' ಎಂಬ ಶಬ್ದ ಇನ್ನೂ ಜನರ ಬಾಯಲ್ಲಿ ಜೀವಂತ ಉಳಿದುದು ಇಲ್ಲಿ ಗಮನಿಸಬೇಕಾದ ವಿಷಯುವೆನಿಸಿದೆ.

ದಾನಶಾಸನವಾದ ಈ ಕಂಬದ ಮೇಲೆ ಕಟ್ಟಲಾದ ಮಂಟಪದಲ್ಲಿ 'ಬ್ರಹ್ಮದೇವರ' ವಿಗ್ರಹವಿರುವುದರಿಂದ ಜನ ಈ 'ತ್ಯಾಗದ ಕಂಬ'ವನ್ನು 'ತ್ಯಾಗದ ಬ್ರಹ್ಮದೇವರ ಕಂಬ' ಎಂದು ಕರೆಯುತ್ತಿದ್ದಂತಿದೆ.